KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೨೫, ೨೦೧೦ (ಚೈತ್ರ ೪, ಶಕ ವರ್ಷ ೧೯೩೨) | ಸಂಚಿಕೆ ೧೨ |
| --- | --- | --- |

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

### ವಿಶೇಷ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ನಲ್ಲೂರಹಳ್ಳಿ ಗ್ರಾಮದ ಸರ್ವೆ ನಂ.79ರಲ್ಲಿ 2–00 ಎಕರೆ ಜಮೀನನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ರಂಗಮಂದಿರ ನಿರ್ಮಿಸಲು ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ:ಆರ್.ಡಿ.70:ಎಲ್‌ಜಿಪಿ.2008 ದಿನಾಂಕ: 08.08.2008.
2) ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ರವರ ಪತ್ರ ಸಂಖ್ಯೆ:ಎಲ್‌ಎನ್‌ಡಿ:ಸಿಆರ್.687/09–10, ದಿನಾಂಕ: 23.1.2010.

**ಪ್ರಸ್ತಾವನೆ:**

ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿಯ ನಲ್ಲೂರಹಳ್ಳಿ ಗ್ರಾಮದ ಸರ್ವೆ ನಂ. 79ರ ಜಮೀನು ಸರ್ಕಾರಿ ಗೋಮಾಳ ಜಮೀನು ಆಗಿದ್ದು, ಒಟ್ಟು ವಿಸ್ತೀರ್ಣ 23–36 ಎಕರೆ/ಗುಂಟೆ ಜಮೀನು ಇದ್ದು ಈ ಪೈಕಿ 14–26 ಎಕರೆ/ಗುಂಟೆ ಜಮೀನನ್ನು ಮೆ:ಸನ್‌ರೈಸ್ ಇಂಟರ್ ಆಕ್ಟೇವ್ ಇಂಡಿಯಾ ಲಿ., ರವರಿಗೆ ಮಂಜೂರಿಯಾಗಿರುತ್ತದೆ. ಹಾಗೂ 2–05 ಎಕರೆ/ಗುಂಟೆ ಜಮೀನು ಕೆ.ಐ.ಎ.ಡಿ.ಬಿ. ಗೆ ಭೂಸ್ವಾಧೀನವಾಗಿರುತ್ತದೆ. ಉಳಿಕೆ 7–05 ಎಕರೆ/ಗುಂಟೆ ಸರ್ಕಾರದ ಹೆಸರಿನಲ್ಲಿ ಸರ್ಕಾರಿ ಗೋಮಾಳ ಶೀರ್ಷಿಕೆಯಲ್ಲಿ ಇರುತ್ತದೆ. ಈ ಪೈಕಿ 2–00 ಎಕರೆ ಜಮೀನನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ರಂಗಮಂದಿರ ನಿರ್ಮಾಣದ ಉದ್ದೇಶಕ್ಕಾಗಿ ಕಾಯ್ದಿರಿಸಲು ನಕ್ಷೆಯನ್ನು ದೃಢೀಕರಿಸಿ ರಾಜಸ್ವ ನಿರೀಕ್ಷಕರ ವರದಿಯೊಂದಿಗೆ ಜಮೀನು ಮಂಜೂರಿ ಮಾಡಲು ತಹಶೀಲ್ದಾರರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಆದೇಶ**

**ಸಂಖ್ಯೆ: ಎಲ್‌ಎನ್‌ಡಿ:(ಪೂ):ಸಿಆರ್:242/09–10, ದಿನಾಂಕ: 11ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿಯ ನಲ್ಲೂರಹಳ್ಳಿ ಗ್ರಾಮದ ಸರ್ವೆ ನಂ. 79 ರಲ್ಲಿ 2–00 ಎಕರೆ ವಿಸ್ತೀರ್ಣದ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ರಂಗಮಂದಿರ ನಿರ್ಮಾಣಕ್ಕಾಗಿ ಈ ಕೆಳಕಂಡ ಷರತ್ತಿಗೆ ಒಳಪಡಿಸಿ ಕಾಯ್ದಿರಿಸಿ ಈ ಮೂಲಕ ಆದೇಶಿಸಿದೆ.

**ಷರತ್ತುಗಳು**

1. ಹಸ್ತಾಂತರಗೊಂಡ ಜಮೀನನ್ನು ಉದ್ದೇಶಿತ ರಂಗಮಂದಿರ ನಿರ್ಮಿಸಲು ಮಾತ್ರ ಮಂಜೂರಿ ನೀಡಿದ್ದು, ಎರಡು ವರ್ಷದೊಳಗೆ ಮಂಜೂರಿ ಜಮೀನನ್ನು ಬಳಸತಕ್ಕದ್ದು.

2. ಉದ್ದೇಶಿತ ಯೋಜನೆಗೆ ಈ ಜಮೀನು ಬಳಕೆಯಾಗದಿದ್ದಲ್ಲಿ ಕೂಡಲೇ ಜಮೀನನ್ನು ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
3. ಪ್ರಶ್ನಿತ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಆದೇಶವು ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.
4. ಈ ಜಮೀನಿನ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಜಮೀನಿಗೆ ಖಾಯಂ ಆಗಿ ಹಾನಿ ಉಂಟು ಮಾಡುವ ರೀತಿ ಏನನ್ನೂ ಮಾಡತಕ್ಕದ್ದಲ್ಲ.

**ಹೆಚ್. ರಾಮಾಂಜನೇಯ**

ಪಿ.ಆರ್. 69 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

### ನಮೂನೆ–27

**ಅಧಿಸೂಚನೆ ಸಂಖ್ಯೆ:ಎಲ್.ಎನ್.ಡಿ.ಸಿಆರ್.47/2008–09, ದಿನಾಂಕ: 17ನೇ ಫೆಬ್ರವರಿ 2010**

**ವಿಷಯ:** ಚಿಕ್ಕಬಳ್ಳಾಪುರ ತಾಲ್ಲೂಕು, ನಂದಿ ಹೋಬಳಿ, ಕಂದವಾರ ಗ್ರಾಮದ ಸ.ನಂ.147 ರಲ್ಲಿ 1.16 ಎಕರೆ ಜಮೀನನ್ನು ಜಿಲ್ಲಾ ನಿರ್ಮಿತಿ ಕೇಂದ್ರಕ್ಕೆ ಗುತ್ತಿಗೆಗೆ ನೀಡುವ ವಿಚಾರದಲ್ಲಿ ಸಾರ್ವಜನಿಕ ಹಕ್ಕನ್ನು ನಿವೃತ್ತಿಗೊಳಿಸಿ, ಸದರಿ ಶೀರ್ಷಿಕೆಯಿಂದ ತಗ್ಗಿಸಿ ಮುಂದಿನ ಕ್ರಮ ಕೈಗೊಳ್ಳುವ ವಿಚಾರ.

**ಉಲ್ಲೇಖ:** 1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ.ಸಿಆರ್.195/08–09 ದಿ:18.05.2009.
2. ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ವರದಿ ಸಂಖ್ಯೆ: ಎಲ್‌ಎನ್‌ಡಿ.ಸಿಆರ್.113/08–09, ದಿನಾಂಕ:6.9.08.
3. ತಹಶೀಲ್ದಾರ್, ಚಿಕ್ಕಬಳ್ಳಾಪುರ ತಾಲ್ಲೂಕು ರವರ ವರದಿ ಸಂಖ್ಯೆ: ಎಲ್‌ಎನ್‌ಡಿ.ಸಿಆರ್.96/08–09, ದಿನಾಂಕ: 27.08.2008 ಮತ್ತು 10.12.2009.

**94ನೇ ನಿಯಮದ 68(1) ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ 'ಸರ್ಕಾರಿ ಖರಾಬು ಕುಂಟೆ' ಪ್ರದೇಶದ ಜಮೀನು ಸಾರ್ವಜನಿಕ ಉಪಯೋಗಕ್ಕೆ ಸದರಿ ಉದ್ದೇಶಕ್ಕೆ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಂತೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸದರಿ ಸರ್ಕಾರಿ ಖರಾಬು ಕುಂಟೆ ಪ್ರದೇಶವು ಸದರಿ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಸದರಿ ಸರ್ಕಾರಿ ಖರಾಬು ಕುಂಟೆ ಪ್ರದೇಶದ ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸದರಿ "ಸರ್ಕಾರಿ ಖರಾಬು ಕುಂಟೆ" ಪ್ರದೇಶದಲ್ಲಿ ಅಥವಾ ಅವರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಜಮೀನನ್ನು ಸರ್ಕಾರದ ಇತರೇ ಉದ್ದೇಶಕ್ಕೆ ಪಡೆದುಕೊಳ್ಳುತ್ತಿರುವುದರಿಂದ ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಆಕ್ಷೇಪಣೆಗಳನ್ನು ಮತ್ತು ಕ್ಲೈಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಪರಿಶೀಲಿಸಲಾಗುವುದು.

**ಅನುಸೂಚಿ**

| | | |
|---|---|---|
| ಜಿಲ್ಲೆ | : | ಚಿಕ್ಕಬಳ್ಳಾಪುರ |
| ತಾಲ್ಲೂಕು | : | ಚಿಕ್ಕಬಳ್ಳಾಪುರ |
| ಹೋಬಳಿ | : | ನಂದಿ |
| ಗ್ರಾಮ | : | ಕಂದವಾರ |

ಸರ್ವೆ ನಂಬರು 147 ರ 2.36 ಎಕರೆ ಪೈಕಿ 1.16 ಎಕರೆ ಜಮೀನು ಜಿಲ್ಲಾ ನಿರ್ಮಿತಿ ಕೇಂದ್ರ, ಚಿಕ್ಕಬಳ್ಳಾಪುರ ರವರಿಗೆ ಕಾರ್ಯಚಟುವಟಿಕೆಗಳಿಗೆ ಗುತ್ತಿಗೆಗೆ ನೀಡಲು ಸಾರ್ವಜನಿಕರ ಹಕ್ಕು ನಿವೃತ್ತಿಗಾಗಿ ಪ್ರಸ್ತಾಪಿಸಲಾಗಿದೆ.

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಸ.ನಂ. 147 |
| ಪಶ್ಚಿಮಕ್ಕೆ | : | ಗಡಿ |
| ಉತ್ತರಕ್ಕೆ | : | ರಸ್ತೆ |
| ದಕ್ಷಿಣಕ್ಕೆ | : | ಸ.ನಂ.146 |

ಜಿಲ್ಲಾಧಿಕಾರಿ,

ಪಿ.ಆರ್. 80 ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮದ 6(1) ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 107 ಭೂಸ್ವಾತು 2009, ದಿನಾಂಕ: 21ನೇ ಡಿಸೆಂಬರ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೇಮಾವತಿ ನಾಲೆಗಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1)ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್ಎಕ್ಯೂ/ಎಸ್ಆರ್/01/2008–09, ದಿನಾಂಕ: 29.08.2008ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಕಾವೇರಿ ನೀರಾವರಿ ನಿಗಮದ ಭೂಸ್ವಾಧೀನ ಪ್ರಕರಣಗಳಲ್ಲಿ ತುರ್ತಾಗಿ ಭೂಸ್ವಾಧೀನ ಪ್ರಕ್ರಿಯೆಗಳನ್ನು ಮುಗಿಸಲು ಅನುವು ಆಗುವಂತೆ ಭೂಸ್ವಾಧೀನ ಅಧಿನಿಯಮದ 17ನೇ ಪ್ರಕರಣದ (4)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಕಲಂ 4(1)ರ ಪ್ರಕಟಣೆ ಹೊರಡಿಸಲು ಸರ್ಕಾರವು ಕಂಇ/13/ಎಕ್ಯೂಡಬ್ಲ್ಯೂ 2004, ದಿನಾಂಕ: 17.6.2004 ರಂತೆ ಅನುಮತಿ ನೀಡಿರುವುದರಿಂದ ಸದರಿ ಅಧಿನಿಯಮದ 5ಎ ಪ್ರಕರಣದ ಉಪಬಂಧಗಳು ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲಾದ ಭೂಮಿಗಳ ಭೂಸ್ವಾಧೀನಕ್ಕೆ ಅನ್ವಯವಾಗುವುದಿಲ್ಲ.

ಮತ್ತು ಕರ್ನಾಟಕ ಕಾಯ್ದೆ 33/1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894 ರ) ಅನ್ವಯ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ತುಮಕೂರು** **ತಾಲ್ಲೂಕು: ತುರುವೇಕೆರೆ** **ಹೋಬಳಿ: ದಂಡಿನಶಿವರ** **ಗ್ರಾಮ: ಸಿದ್ದಾಪುರ ಹರಿಜನ ಕಾಲೋನಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ ವಿವರ ಮನೆ ಮತ್ತು ಫೌಂಡೇಷನ್ |
|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ |
| 1. | ಮೂರ್ತಪ್ಪ ಬಿನ್ ಗಿರಿಯಪ್ಪ | ಮೂರ್ತಯ್ಯ | 101/24 ಮತ್ತು 20 | ಗ್ರಾಮ ಠಾಣಾ | ಹುಚ್ಚಯ್ಯನ ಮನೆ | ಕುಮಾರಯ್ಯನ ಮನೆ | ಗಂಗಣ್ಣನ ಮನೆ ಮತ್ತು ಓಣಿ | ರಸ್ತೆ | 570.52 ಚ.ಅ<br>260.50 ಚ.ಅ<br>ಒಟ್ಟು 831.02 ಚ.ಅ |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ ವಿವರ ಮನೆ ಮತ್ತು ಫೌಂಡೇಷನ್ |
|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ |
| 2 | ಲಕ್ಷ್ಮಯ್ಯ ಬಿನ್ ಹುಚ್ಚಯ್ಯ | ಲಕ್ಷ್ಮಯ್ಯ | 78/3 | ಗ್ರಾಮ ಠಾಣಾ | ಗೋವಿಂದನ ಮನೆ | ಅಲ್ಲಯ್ಯ ಓಣಿ | ನಾಗಣ್ಣನ ಮನೆ ಮತ್ತು ಓಣಿ | ರಸ್ತೆ ಮತ್ತು ಬಾವಿ | 626.44 ಚ.ಅ |
| | **ಒಟ್ಟು** | | | | | | | | **1457.46 ಚ.ಅ** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

ಪಿ.ಆರ್. 72

## ಕಂದಾಯ ಸಚಿವಾಲಯ

**ಭೂಸ್ವಾಧೀನ ಅಧಿನಿಯಮದ 6(1) ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 108 ಭೂಸ್ವಾತು 2009, ದಿನಾಂಕ: 21ನೇ ಡಿಸೆಂಬರ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೇಮಾವತಿ ನಾಲೆಗಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1)ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್‌ಎಕ್ಯೂ/ಎಸ್‌ಆರ್/71/07–08, ದಿನಾಂಕ: 13.03.2008ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಕಾವೇರಿ ನೀರಾವರಿ ನಿಗಮದ ಭೂಸ್ವಾಧೀನ ಪ್ರಕರಣಗಳಲ್ಲಿ ತುರ್ತಾಗಿ ಭೂಸ್ವಾಧೀನ ಪ್ರಕ್ರಿಯೆಗಳನ್ನು ಮುಗಿಸಲು ಅನುವು ಆಗುವಂತೆ ಭೂಸ್ವಾಧೀನ ಅಧಿನಿಯಮದ 17ನೇ ಪ್ರಕರಣದ (4)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಕಲಂ 4(1)ರ ಪ್ರಕಟಣೆ ಹೊರಡಿಸಲು ಸರ್ಕಾರವು ಕಂಇ/13/ಎಕ್ಯೂಡಬ್ಲ್ಯೂ 2004, ದಿನಾಂಕ: 17.6.2009 ರಂತೆ ಅನುಮತಿ ನೀಡಿರುವುದರಿಂದ ಸದರಿ ಅಧಿನಿಯಮದ 5ಎ ಪ್ರಕರಣದ ಉಪಬಂಧಗಳು ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲಾದ ಭೂಮಿಗಳ ಭೂಸ್ವಾಧೀನಕ್ಕೆ ಅನ್ವಯವಾಗುವುದಿಲ್ಲ.

ಮತ್ತು ಕರ್ನಾಟಕ ಕಾಯ್ದೆ 33/1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894 ರ) (1)5ಎ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

## ಅನುಸೂಚಿ

ಜಿಲ್ಲೆ: ತುಮಕೂರು ತಾಲ್ಲೂಕು: ತುರುವೇಕೆರೆ ಹೋಬಳಿ: ದಂಡಿನಶಿವರ ಗ್ರಾಮ: 1. ಸಿದ್ದಾಪುರ ಹರಿಜನ ಕಾಲೋನಿ 2. ಮಾಚೇನಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| | | | | ಗ್ರಾಮ1: ಮಾಚೇನಹಳ್ಳಿ | | | | | | |
| 1. | ಎಂ.ಬಿ. ಪರಮಶಿವಯ್ಯ | ಎಂ.ಬಿ. ಪರಮಶಿವಯ್ಯ | 28/1 | ಖುಷ್ಕಿ | 28/2 | 29 | 28/1ರ ಉಳಿಕೆ | 28/1ರ ಉಳಿಕೆ | 0–01 1/2 | 0–05 |
| 2. | ಎಂ.ಬಿ. ಶಶಿಧರ್ ಬಿನ್ ಎಂ.ಬಿ. ಚನ್ನಬಸಪ್ಪ, ಎಂ.ಬಿ. ರವಿಪಾಟೀಲ್, ಎಂ.ಬಿ. ಮನೋಹರ್, ಎಂ.ಬಿ. ಜಯಕುಮಾರ್ ಬಿನ್ ಎಂ.ಬಿ. ಶಿವಬಸವಯ್ಯ, ಎಂ.ಬಿ. ಪರಮಶಿವಯ್ಯ, ಲಿಂಗಮ್ಮ ಕೋಂ ಎಂ.ಬಿ. ಬಸವರಾಜು | ಚಂದ್ರಮೌಳೇಶ್ವರ, ಎಂ.ಬಿ. ಶಶಿಧರ್, ಎಂ.ಬಿ. ಮನೋಹರ್, ಎಂ.ಬಿ. ರವಿಕುಮಾರ್, ಎಂ.ಬಿ. ಜಯಕುಮಾರ್, ಎಂ.ಬಿ. ಪರಮಶಿವಯ್ಯ | 28/2 | ಖುಷ್ಕಿ | 28/3 | 28/1 | 28/2 ಉಳಿಕೆ | 28/2 ಉಳಿಕೆ | 0–01 1/2 | 0–05 |
| 3. | ಎಂ.ಬಿ. ಬಸವರಾಜು | ಎಂ.ಬಿ. ಬಸವರಾಜು | 28/3 | ಖುಷ್ಕಿ | 28/4 | 28/2 | 28/3 ಉಳಿಕೆ | 28/3 ಉಳಿಕೆ | 0–01 1/2 | 0–05 |
| 4. | ಎಂ.ಬಿ. ಶಿವಬಸಪ್ಪ | ಎಂ.ಬಿ. ಶಿವಬಸಪ್ಪ | 28/4 | ಖುಷ್ಕಿ | 28/5 | 28/3 | 284 ಉಳಿಕೆ | 28/4 ಉಳಿಕೆ | 0–01 1/2 | 0–05 |
| 5. | ಎಂ.ಬಿ. ಚಂದ್ರಮೌಳೇಶ್ವರ, ಎಂ.ಬಿ. ಪರಮಶಿವಯ್ಯ ಬಿನ್ ಸಿದ್ದಬಸವಯ್ಯ, ಎಂ.ಪಿ. ನಟರಾಜು ಬಿನ್ ಎಂ.ಎನ್. ಪುಟ್ಟಬಸವಯ್ಯ, ಎಂ.ಬಿ. ಜಯಕುಮಾರ್ ಬಿನ್ ಎಂ.ಬಿ. ಶಿವಬಸವಯ್ಯ, ಎಂ. ವೃಷಭೇಂದ್ರ ಮತ್ತು ಎಂ. ಷಣ್ಮುಖಸ್ವಾಮಿ ಬಿನ್ ಎಂ.ಎಸ್. ಮರಿಬಸವಯ್ಯ, ಎಂ.ಜಿ. ವಿರೂಪಾಕ್ಷಮ್ಮ ಕೋಂ ಲೇ.ಎಂ.ಎಸ್. ಬಸಪ್ಪ | ಎಂ.ಬಿ. ಚಂದ್ರಮೌಳೇಶ್ವರ, ಬಸವಪ್ರಭು, ಎಂ.ಎಸ್. ಬಸವರಾಜು, ಎಂ.ಬಿ. ಪರಮಶಿವಯ್ಯ, ಎಂ.ಬಿ. ಶಶಿಧರ್, ಎಂ.ಪಿ. ನಟರಾಜು ಎಂ.ಬಿ. ಜಯಕುಮಾರ್, ಎಂ.ಎನ್. ಶಿವಲಿಂಗಪ್ಪ, ಎಂ. ವೃಷಭೇಂದ್ರ ಮತ್ತು ಎಂ. ಷಣ್ಮುಖ ಸ್ವಾಮಿ, ಎಂ.ಜಿ. ವಿರೂಪಾಕ್ಷಮ್ಮ | 29 | ಖುಷ್ಕಿ | 28/1 | 31 | 29 ಉಳಿಕೆ | 29 ಉಳಿಕೆ | 0–05 | 0–05 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 6. | ಎಂ.ಬಿ. ರಾಮೇಗೌಡ ಬಿನ್ ಬಸವೇಗೌಡ, ಎಂ.ಬಿ. ರವಿಪಟೇಲ್, ಎಂ.ಬಿ. ಮನೋಹರ್, ಎಂ.ಬಿ. ಜಯಕುಮಾರ್ ಬಿನ್ ಎಂ.ಬಿ. ಶಿವಬಸವಯ್ಯ | ಎಂ.ಬಿ. ಚಂದ್ರಮೌಳೇಶ್ವರ, ಎಂ.ಬಿ. ರವಿ ಪಾಟೀಲ್, ಎಂ.ಬಿ. ಮನೋಹರ್, ಎಂ.ಬಿ. ಜಯಕುಮಾರ್, ಎಂ.ಬಿ. ರಾಮೇಗೌಡ | 32/1 ಸಿ | ಖುಷ್ಕಿ | 29 | ರಸ್ತೆ | 31 | 32/1ಎ | 0–01 | 0–03 |
| 7. | ಜಿ.ಎಸ್. ಗುರುಸಿದ್ದಪ್ಪ ಬಿನ್ ಸಿದ್ದರಾಮಯ್ಯ, ಗೌರಮ್ಮ ಕೋಂ ಸಿದ್ದಯ್ಯ, ಮರಿಬಸವಯ್ಯ ಬಿನ್ ಸಿದ್ದರಾಮಯ್ಯ, ಎಂ.ಬಿ. ಶಿವಯೋಗಿ ಬಿನ್ ಬಸವಲಿಂಗಪ್ಪ, ಎಂ.ಪಿ. ಲೋಕೇಶ್ ಬಿನ್ ಎಂ.ಹೆಚ್. ಪರಮಶಿವಯ್ಯ | ಜಿ.ಎಸ್. ಗುರುಸಿದ್ದಯ್ಯ, ಎಂ.ಬಿ. ಶಿವಯೋಗಿ, ಗೌರಮ್ಮ, ಮರಿಬಸವಯ್ಯ, ಎಂ.ಪಿ. ಲೋಕೇಶ್ | 36/3 | ಖುಷ್ಕಿ | ರಸ್ತೆ | 36/3 ಉಳಿಕೆ | 36/3 | 36/3 | 0–04 | 0–13 |
| 8. | ಎಂ.ಹೆಚ್. ಪರಮಶಿವಯ್ಯ ಬಿನ್ ಹೊನ್ನಪ್ಪ | ಎಂ.ಹೆಚ್. ಪರಮಶಿವಯ್ಯ | 36/4 | ಖುಷ್ಕಿ | 36/4 ಉಳಿಕೆ | 36/4 ಉಳಿಕೆ | 36/5 | 36/3 | 0–02 1/2 | 0–08 |
| 9. | ನಂಜುಂಡಮ್ಮ ಕೋಂ ಲೇ.ಆರ್. ಸಿದ್ದಪ್ಪ | ನಂಜುಂಡಮ್ಮ | 36/5 | ಖುಷ್ಕಿ | 36/5 ಉಳಿಕೆ | 36/5 ಉಳಿಕೆ | 36/6 | 36/4 | 0–02 1/2 | 0–08 |
| 10. | ಎಂ. ರಂಗಸ್ವಾಮಿ, ಎಂ. ಶಿವಣ್ಣ, ಎಂ. ಶಶಿಧರ್, ಎಂ. ರವಿಕುಮಾರ್ | ಎಂ. ರಂಗಸ್ವಾಮಿ, ಎಂ. ಶಿವಣ್ಣ, ಎಂ. ಶಶಿಧರ್, ಎಂ. ರವಿಕುಮಾರ್ | 36/6 | ಖುಷ್ಕಿ | 36/6ರ ಉಳಿಕೆ | 36/6ರ ಉಳಿಕೆ | 52/1 | 36/5 | 0–06 | 0–19 |
| 11. | ಬಸವಣ್ಣ ಬಿನ್ ನಂಜುಂಡೇಗೌಡ, ಎಂ.ಬಿ. ಶಿವರಾಮಯ್ಯ ಬಿನ್ ಬಸಪ್ಪ, ಎಂ.ಎಸ್. ಚಂದ್ರಶೇಖರಯ್ಯ ಬಿನ್ ಸಿದ್ದಪ್ಪ | ಎಂ.ಬಿ. ರಾಮಣ್ಣ, ಬಸವಣ್ಣ ಗಂಗಾಧರಯ್ಯ, ಎಂ.ಬಿ. ಶಿವರಾಮಯ್ಯ ಎಂ.ಎಸ್. ಚಂದ್ರಶೇಖರಯ್ಯ | 52/1 | ಖುಷ್ಕಿ | 52/1ರ ಉಳಿಕೆ | 52/1ರ ಉಳಿಕೆ | 52/2 | 36/6 | 0–02 | 0–06 |
| 12. | ನಂಜೇಗೌಡ ಬಿನ್ ನಂಜುಂಡೇಗೌಡ, ನಾಗರತ್ನಮ್ಮ, ನಿಂಗಮ್ಮ, ಎಂ.ಪಿ. ಚನ್ನಬಸಪ್ಪ ಬಿನ್ ಲೇ. ಎಂ.ಪಿ. ಬಸವರಾಜು | ಬಸವಣ್ಣ, ನಂಜುಂಡೇಗೌಡ, ನಾಗರತ್ನಮ್ಮ, ನಿಂಗಮ್ಮ, ಎಂ.ಪಿ. ಚನ್ನಬಸಪ್ಪ | 52/2 | ಖುಷ್ಕಿ | 52/2ರ ಉಳಿಕೆ | 52/2ರ ಉಳಿಕೆ | 52/3 | 52/1 | 0–01 1/2 | 0–05 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 13. | ಸಿ. ಮಹಲಿಂಗಯ್ಯ ಬಿನ್ ಎಂ.ಪಿ. ಚನ್ನಬಸವೇಗೌಡ, ಎಂ.ಪಿ. ಚನ್ನಬಸಪ್ಪ ಬಿನ್ ಲೇ.ಎಂ.ಪಿ. ಬಸವರಾಜು | ಸಿ. ಮಹಲಿಂಗಯ್ಯ, ಎಂ.ಪಿ. ಚನ್ನಬಸಪ್ಪ, ಸಿ. ಮಹಲಿಂಗಯ್ಯ | 52/3 | ಖುಷ್ಕಿ | 52/3ರ ಉಳಿಕೆ | 52/3ರ ಉಳಿಕೆ | 53/3 | 52/2 | 0–02 1/2 | 0–08 |
| 14. | ಎಸ್. ಸಿದ್ದಬಸವೇಗೌಡ ಬಿನ್ ನಂಜುಂಡೇಗೌಡ | ದಾಸೇಗೌಡ, ಸಣ್ಣರಂಗಯ್ಯ | 53/1 | ಖುಷ್ಕಿ | 53/1ರ ಉಳಿಕೆ | 23/1ರ ಉಳಿಕೆ | 55/1 | 53/2 | 0–03 | 0–10 |
| 15. | ತಿಮ್ಮಪ್ಪ ಬಿನ್ ಕರಿಯಪ್ಪ, ಕರಿಯಪ್ಪ ಬಿನ್ ಸಣ್ಣಪ್ಪಗೌಡ | ತಿಮ್ಮಪ್ಪ, ಕರಿಯಪ್ಪ | 53/2 | ಖುಷ್ಕಿ | 53/2ರ ಉಳಿಕೆ | 53/2ರ ಉಳಿಕೆ | 53/1 | 53/3 | 0–01 1/2 | |
| 16. | ಪಾಲಮ್ಮ ಕೋಂ ತಿಮ್ಮಯ್ಯ, ಚನ್ನೇಗೌಡ, ದಾಸೇಗೌಡ, ಶಂಕರೇಗೌಡ ತಾಯಿ ಪಾಲಮ್ಮ | ಚನ್ನೇಗೌಡ | 53/3 | ಖುಷ್ಕಿ | 53/3ರ ಉಳಿಕೆ | 52/2ರ ಉಳಿಕೆ | 53/2 | 52/3 | 0–01 1/2 | |
| 17. | ಬಸವಣ್ಣದೇವರು | ಶಿವನಂಜಪ್ಪ, ಬಸಪ್ಪ, ಚನ್ನಬಸವಯ್ಯ, ನಂಜುಂಡಪ್ಪ, ಗುರಿಯಣ್ಣ, ಶಂಕರಯ್ಯ, ಚನ್ನಬಸವಣ್ಣ, ಚಿಕ್ಕಣ್ಣ, ಶಿವನಂಜಪ್ಪ, ಮಹಲಿಂಗಯ್ಯ, ಚಂದ್ರಯ್ಯ | 55/1 | ಖುಷ್ಕಿ | 55/1ರ ಉಳಿಕೆ | 55/1 ಉಳಿಕೆ | 49/1ಎ | 53/1 | 0–05 | |
| 18. | ದಾಸ ಬಿನ್ ತಿಮ್ಮ, ದಾಸೇಗೌಡ ಬಿನ್ ದಾಸಪ್ಪ, ದೇವೀರಮ್ಮ ಕೋಂ ತಿಮ್ಮಯ್ಯ, ಈರಯ್ಯ ಬಿನ್ ದಾಸಪ್ಪ | ತಿಮ್ಮಪ್ಪ, ಈರಯ್ಯ, ದಾಸೇಗೌಡ, ದೇವೀರಮ್ಮ | 49/1ಎ | ಖುಷ್ಕಿ | 49/1ಎ ಉಳಿಕೆ | 49/1ಬಿ | 49/1ಎ ಉಳಿಕೆ | 55/1 | 0–01 | |
| 19. | ಸಿದ್ದನಂಜಮ್ಮ ಕೋಂ ಪಾಲಯ್ಯ, ಟಿ. ವಿನೋದಮ್ಮ ಕೋಂ ಲೇ.ಎಂ.ಸಿ.ಶಿವಯ್ಯ | ಎಂ.ಸಿ.ಶಿವಯ್ಯ, ಟಿ.ನೋದಮ್ಮ, ಸಣ್ಣನಂಜಮ್ಮ | 50/5ಎ | ಖುಷ್ಕಿ | 50/5ಎ | 50/5ಎ | 50/4ಎ | 50/5ಎ ಉಳಿಕೆ | 0–02 | |
| 20. | ನಂಜೇಗೌಡ ಬಿನ್ ನಂಜೇಗೌಡ ಎಂ.ಎಸ್. ನಾಗರತ್ನಮ್ಮ, ನಿಂಗಮ್ಮ, ಎಂ.ಪಿ. ಚನ್ನಬಸಪ್ಪ ಬಿನ್ ಲೇ.ಎಂ.ಪಿ. ಬಸವರಾಜು | ನಿಂಗಮ್ಮ, ಎಂ.ಎಸ್. ನಾಗರತ್ನಮ್ಮ, ನಂಜುಂಡಪ್ಪ, ಚನ್ನಬಸವಯ್ಯ, ಎಂ.ಪಿ. ಚನ್ನಬಸಪ್ಪ | 50/4ಎ | ಖುಷ್ಕಿ | 50/4ಎ | 50/4ಎ ಉಳಿಕೆ | 50/4ಎ | 50/4ಎ | 0–06 | |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 21. | ಚನ್ನಬಸವಯ್ಯ ಬಿನ್ ನಂಜೇಗೌಡ | ಚನ್ನಬಸವಯ್ಯ | 50/3ಎ | ಖುಷ್ಕಿ | 50/3 ಉಳಿಕೆ | 50/3ಎ | 50/2ಎ | 50/3ಎ ಉಳಿಕೆ | 0–05 | |
| 22. | ಎಂ.ಎನ್. ಚನ್ನಬಸವಯ್ಯ ಬಿನ್ ನಂಜಪ್ಪ | ಎಂ.ಎನ್. ಚನ್ನಬಸವಯ್ಯ | 50/2ಎ | ಖುಷ್ಕಿ | 50/2ಎ ಉಳಿಕೆ | 50/6 | 50/2ಎ ಉಳಿಕೆ | 50/3ಎ | 0–03 | |
| 23. | ಸಿ. ಮಹಲಿಂಗಯ್ಯ ಬಿನ್ ಎಂ.ಪಿ. ಚನ್ನಬಸವೇಗೌಡ, ಕೆ.ಜಿ. ರುಕ್ಮಿಣಮ್ಮ ಕೋಂ ಕೆ. ಶಿವಲಿಂಗಯ್ಯ | ಸಿ. ಮಹಲಿಂಗಯ್ಯ, ಲಕ್ಷ್ಮೀದೇವಮ್ಮ, ಕೆ.ಜಿ. ರುಕ್ಮಿಣಮ್ಮ | 50/6 | ಖುಷ್ಕಿ | 50/2ಎ | 50/6 | 50/6 | 50/6 ಉಳಿಕೆ | 0–10 | |
| 24. | ದೊಡ್ಡೀರಮ್ಮ ಬಿನ್ ಚಿಕ್ಕೀರಯ್ಯ, ವೀರಭದ್ರಯ್ಯ ಬಿನ್ ಡಿ. ನಂಜಪ್ಪ, ಆರ್.ಎಸ್. ಚನ್ನಗೌಡ | ವೀರಪ್ಪ, ವೀರಭದ್ರಯ್ಯ, ಆರ್.ಎಸ್. ಶಿವಸ್ವಾಮಿ | 44/3 | ಖುಷ್ಕಿ | 50/6 | 43 | 44/3 ಉಳಿಕೆ | 44/3 | 0–07 | |
| 25. | ಸಿದ್ದಮ್ಮ ಕೋಂ ನಂಜಮ್ಮ | ಸಿದ್ದಮ್ಮ | 93 | ಖುಷ್ಕಿ | 93 | 93 | 43 | 43 | 0–04 | |
| | | **ಒಟ್ಟು** | | | | | | | **2–02** | |
| | | **ಗ್ರಾಮ:2. ಸಿದ್ದಾಪುರ ಹರಿಜನ ಕಾಲೋನಿ** | | | | | | | | |
| 1. | ಗೋವಿಂದಯ್ಯ ಬಿನ್ ಕೆ.ಜಿ. ವೆಂಕಟಯ್ಯ | ಗೋವಿಂದಯ್ಯ | 136/44ಸಿ | ಗ್ರಾಮ ಠಾಣ | ಸಾವಿತ್ರಮ್ಮನ ಮನೆ | ಗಿರಿಯಪ್ಪನ ಮನೆ | ರಸ್ತೆ | ರಸ್ತೆ | 455 ಚ.ಅ. | |

**ಘೋಷ್ವಾರೆ**

| ಕ್ರ. ಸಂ. | ಗ್ರಾಮದ ಹೆಸರು | ಖುಷ್ಕಿ | ಒಟ್ಟು |
|---|---|---|---|
| 1. | ಮಾಚೇನಹಳ್ಳಿ | 2–02 | 2–02 |
| 2. | ಸಿದ್ದಾಪುರ ಹರಿಜನ ಕಾಲೋನಿ | 455 ಚ.ಅ | 455 ಚ.ಅ |
| | **ಒಟ್ಟು** | **2–02 455ಚ.ಅ** | **2–02 455ಚ.ಅ** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

ಪಿ.ಆರ್. 73